# ಕರ್ನಾಟಕ ವಿಧಾನ ಪರಿಷತ್

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 189
ಸದಸ್ಯರ ಹೆಸರು: ಶ್ರೀ ಪ್ರಕಾಶ್ ಕೆ. ರಾಥೋಡ್
ಉತ್ತರಿಸುವ ದಿನಾಂಕ : 22-09-2020
ಉತ್ತರಿಸುವವರು: ಪೌರಾಡಳಿತ, ತೋಟಗಾರಿಕೆ ಮತ್ತು ರೇಷ್ಮೆ ಸಚಿವರು

| | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಕರ್ನಾಟಕ ರಾಜ್ಯದಲ್ಲಿ ಯಾವ ಯಾವ ಜಿಲ್ಲೆಗಳಲ್ಲಿ ರೇಷ್ಮೆ ಬೆಳೆಯಲಾಗುತ್ತದೆ; (ವಿವರ ನೀಡುವುದು) | ರಾಜ್ಯದಲ್ಲಿ ಜಿಲ್ಲಾವಾರು ರೇಷ್ಮೆ ಬೆಳೆ ಬೆಳೆಯಲಾಗುವ ವಿವರಗಳನ್ನು ಅನುಬಂಧದಲ್ಲಿ ಒದಗಿಸಿದೆ. |
| ಆ | ರಾಜ್ಯದ ಹಲವು ಜಿಲ್ಲೆಗಳಲ್ಲಿ ರೇಷ್ಮೆ ಬೆಳೆಯುತ್ತಿದ್ದು, ರೇಷ್ಮೆ ಕೃಷಿಗೆ ಯಾವ ಯಾವ ಉತ್ತೇಜನ ನೀಡಲಾಗಿದೆ; (ಕಳೆದ 3 ವರ್ಷಗಳ ವಿವರ ನೀಡುವುದು) | ರಾಜ್ಯದಲ್ಲಿ ರೇಷ್ಮೆ ಕೃಷಿಯನ್ನು ಅಭಿವೃದ್ಧಿಪಡಿಸಲು ನಿಟ್ಟಿನಲ್ಲಿ ಪ್ರತಿ ಸಾಲಿನಲ್ಲಿಯೂ ರೈತರಿಗೆ ಈ ಕೆಳಕಂಡ ರೇಷ್ಮೆ ಅಭಿವೃದ್ಧಿ ಕಾರ್ಯಕ್ರಮಗಳು, ಸಹಾಯಧನ ಹಾಗೂ ಪ್ರೋತ್ಸಾಹಧನ ಸೌಲಭ್ಯಗಳನ್ನು ನೀಡಿ ಉತ್ತೇಜಿಸಲಾಗುತ್ತಿದೆ.<br>1. ಸುಧಾರಿತ ಹಿಪ್ಪುನೇರಳೆ ತೋಟ ಬೆಳೆಯಲು, ನರ್ಸರಿ ಬೆಳೆಸಲು ಸಹಾಯಧನ ಹಾಗೂ ತಾಂತ್ರಿಕ ಮಾಹಿತಿ ಒದಗಿಸಲಾಗುತ್ತಿದೆ.<br>2. ಹಿಪ್ಪುನೇರಳೆ ತೋಟಕ್ಕೆ ಟ್ರೆಂಚಿಂಗ್ - ಮಲ್ಚಿಂಗ್ ಮಾಡಲು ಸಹಾಯಧನ ಹಾಗೂ ತಾಂತ್ರಿಕ ಮಾಹಿತಿ.<br>3. ಹಿಪ್ಪುನೇರಳೆ ತೋಟಕ್ಕೆ ಹನಿ ನೀರಾವರಿ ಅಳವಡಿಕೆಗೆ ಶೇ.90ರಷ್ಟು ಸಹಾಯಧನ.<br>4. ಹಿಪ್ಪುನೇರಳೆ ತೋಟದ ಮಣ್ಣಿನ ಫಲವತ್ತತೆಗಾಗಿ ಜೈವಿಕಗೊಬ್ಬರ ಬಳಕೆ, ಹಿಪ್ಪುನೇರಳೆ ಸೊಪ್ಪಿನ ಇಳುವರಿ ಹಾಗೂ ಗುಣಮಟ್ಟ ಹೆಚ್ಚಿಸುವ ಸಲುವಾಗಿ ಸಸ್ಯ ಸಂವರ್ಧಕ ಹಾಗೂ ಬೇರು ಕೊಳೆ ನಿಯಂತ್ರಣಕ್ಕಾಗಿ ಸಹಾಯಧನ.<br>5. ಹಿಪ್ಪುನೇರಳೆ ಮರ ಕೃಷಿ ಪದ್ಧತಿ ಉತ್ತೇಜನಕ್ಕಾಗಿ ಸಹಾಯಧನ.<br>6. ರೇಷ್ಮೆ ಹುಳು ಸಾಕಾಣಿಕೆ ಮನೆ/ಮೌಂಟಿಂಗ್ ಹಾಲ್ ನಿರ್ಮಾಣಕ್ಕೆ ಸಹಾಯಧನ.<br>7. ಸೋಂಕು ನಿವಾರಕಗಳ ಪೂರೈಕೆ ಮತ್ತು ಸಲಕರಣೆಗಳಿಗೆ ಸಹಾಯಧನ ಹಾಗೂ ತಾಂತ್ರಿಕ ಮಾಹಿತಿ.<br>8. ರೋಟರಿ ಚಂದ್ರಿಕೆಗಳ ಖರೀದಿಗೆ ಸಹಾಯಧನ<br>9. ದ್ವಿತಳಿ ಚಾಕಿ ವೆಚ್ಚಕ್ಕೆ ಸಹಾಯಧನ.<br>10. ಚಾಕಿ, ಸಾಕಾಣಿಕಾ ಕೇಂದ್ರದ ಸ್ಥಾಪನೆಗೆ / ಸಲಕರಣೆಗಳಿಗೆ ಖರೀದಿಗೆ ಸಹಾಯಧನ.<br>11. ನೂತನ ತಾಂತ್ರಿಕತೆಗಳ ಅಳವಡಿಕೆಗೆ ರೈತರಿಗೆ ತರಬೇತಿ ಮತ್ತು ಕಾರ್ಯಾಗಾರ.<br>12. ರೇಷ್ಮೆ ಗೂಡಿನ ಧಾರಣೆ ಕುಸಿತ ಸಂದರ್ಭದಲ್ಲಿ ರೇಷ್ಮೆ ಬೆಳೆಗಾರರಿಗೆ ಪ್ರೋತ್ಸಾಹ ಧನ ನೀಡಲಾಗುತ್ತಿದೆ.<br>13. ದ್ವಿತಳಿ ಬಿತ್ತನೆ ಬೆಳೆಗಾರರು ಹಾಗೂ ಮೈಸೂರು ಬಿತ್ತನೆ ಬೆಳೆಗಾರರು ಬೆಳೆಯುವ ಬಿತ್ತನೆ ಗೂಡಿಗೆ ಪ್ರೋತ್ಸಾಹಧನ / ಬೋನಸ್ ನೀಡಲಾಗುತ್ತಿದೆ. |

| | | |
|---|---|---|
| | | 14.ರೇಷ್ಮೆ ಬಿತ್ತನೆ ಬೆಳೆಗಾರರಿಗೆ ಉತ್ಪಾದಕತೆ ಮತ್ತು ಗುಣಮಟ್ಟ ಆಧರಿಸಿ ಬಿತ್ತನೆ ಗೂಡಿಗೆ ಪ್ರೋತ್ಸಾಹಧನ ನೀಡಲಾಗುತ್ತಿದೆ.<br>15. ಉತ್ತರ ಕರ್ನಾಟಕ ಜಿಲ್ಲೆಗಳಲ್ಲಿ ಉತ್ಪಾದಿಸುವ ದ್ವಿತಳಿ ರೇಷ್ಮೆ ಗೂಡಿಗೆ ಕೆ.ಜಿ.ಗೆ ರೂ.10/-ರಂತೆ ಸಾಗಾಣಿಕೆ ವೆಚ್ಚ ನೀಡಲಾಗುತ್ತಿದೆ.<br>ಮಹಾತ್ಮ ಗಾಂಧಿ ರಾಷ್ಟ್ರೀಯ ಉದ್ಯೋಗ ಖಾತ್ರಿ ಯೋಜನೆಯಡಿ ಹಿಪ್ಪುನೇರಳೆ ನರ್ಸರಿ / ತೋಟ ಸ್ಥಾಪನೆ, ತೋಟ ನಿರ್ವಹಣೆ ಮತ್ತು ಹಿಪ್ಪುನೇರಳೆ ಮರ ಕೃಷಿ ಪದ್ಧತಿ ಚಟುವಟಿಕೆಗಳನ್ನು ಹಮ್ಮಿಕೊಳ್ಳಲಾಗಿದ್ದು, ರೈತರಿಗೆ ಕೂಲಿ/ಸಾಮಗ್ರಿ ವೆಚ್ಚವನ್ನು ಭರಿಸುವ ಮೂಲಕ ಗ್ರಾಮೀಣ ಪ್ರದೇಶದಲ್ಲಿ ಉದ್ಯೋಗವಕಾಶವನ್ನು ಕಲ್ಪಿಸಿ ಆರ್ಥಿಕ ಸದೃಢತೆಯನ್ನು ಒದಗಿಸಲಾಗುತ್ತಿದೆ. |

ರೇಷ್ಮೆ|೩೩ರೇಕೃವಿ 2020

(ನಾರಾಯಣ ಗೌಡ)
ಪೌರಾಡಳಿತ, ತೋಟಗಾರಿಕೆ ಮತ್ತು ರೇಷ್ಮೆ ಸಚಿವರು

## ಪ್ರಶ್ನೆ ಸಂಖ್ಯೆ:189ಕ್ಕೆ ಅನುಬಂಧ

| ಕ್ರಸಂ | ಜಿಲ್ಲೆಗಳು | ಅಗಸ್ಟ್-2020ರ ಅಂತ್ಯಕ್ಕೆ ಹಿಪ್ಪುನೇರಳೆ ವಿಸ್ತೀರ್ಣ (ಹೆಕ್ಟೇರ್‌ಗಳಲ್ಲಿ) |
|---|---|---|
| 1 | ಬೆಂಗಳೂರು ಗ್ರಾಮಾಂತರ | 7100.50 |
| 2 | ಬೆಂಗಳೂರು ನಗರ | 1067.30 |
| 3 | ಚಿಕ್ಕಬಳ್ಳಾಪುರ | 21126.67 |
| 4 | ಚಿತ್ರದುರ್ಗ | 2120.80 |
| 5 | ದಾವಣಗೆರೆ | 306.10 |
| 6 | ಕೋಲಾರ | 20068.71 |
| 7 | ರಾಮನಗರ | 19284.75 |
| 8 | ಶಿವಮೊಗ್ಗ | 236.12 |
| 9 | ತುಮಕೂರು | 5231.27 |
| 10 | ಚಾಮರಾಜನಗರ | 1299.77 |
| 11 | ಚಿಕ್ಕಮಗಳೂರು | 93.42 |
| 12 | ದಕ್ಷಿಣ ಕನ್ನಡ | 18.70 |
| 13 | ಹಾಸನ | 1749.44 |
| 14 | ಕೊಡಗು | 10.80 |
| 15 | ಮಂಡ್ಯ | 16669.79 |
| 16 | ಮೈಸೂರು | 2051.01 |
| 17 | ಉಡುಪಿ | 29.56 |
| 18 | ಬಳ್ಳಾರಿ | 2108.30 |
| 19 | ಬೀದರ್ | 431.50 |
| 20 | ಕಲಬುರ್ಗಿ | 726.69 |
| 21 | ಕೊಪ್ಪಳ | 452.49 |
| 22 | ರಾಯಚೂರು | 709.58 |
| 23 | ಯಾದಗಿರಿ | 215.97 |
| 24 | ಬಾಗಲಕೋಟೆ | 746.81 |
| 25 | ಬೆಳಗಾವಿ | 1117.12 |
| 26 | ವಿಜಯಪುರ | 556.90 |
| 27 | ಧಾರವಾಡ | 203.75 |
| 28 | ಗದಗ | 646.34 |
| 29 | ಹಾವೇರಿ | 2087.02 |
| 30 | ಉತ್ತರ ಕನ್ನಡ | 191.50 |